# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಸದಸ್ಯರ ಹೆಸರು | ಶ್ರೀ ರಘುನಾಥ್ ರಾವ್ ಮಲ್ಕಾಪೂರೆ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 833 (988) |
| ಉತ್ತರಿಸ ಬೇಕಾದ ದಿನಾಂಕ | 21-12-2021 |
| ಉತ್ತರಿಸ ಬೇಕಾದವರು | ನಗರಾಭಿವೃದ್ಧಿ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೀದರ ನಗರದಲ್ಲಿ ಒಳಚರಂಡಿ ಮತ್ತು ಕುಡಿಯುವ ನೀರಿನ ವ್ಯವಸ್ಥೆ ಕಲ್ಪಿಸುವ ಕಾರ್ಯಕ್ಕೆ ಕೈಗೆತ್ತಿಕೊಂಡಿರುವ ಕಾಮಗಾರಿಗಳು ಯಾವುವು; (ಸಂಪೂರ್ಣ ಮಾಹಿತಿ ನೀಡುವುದು) | ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ವತಿಯಿಂದ ಬೀದರ್ ನಗರದಲ್ಲಿ ನೀರು ಸರಬರಾಜು ವ್ಯವಸ್ಥೆ ಕಲ್ಪಿಸಲು ನಗರದ 5 ವಲಯ (1,2,3,7 ಮತ್ತು 8) ಗಳಲ್ಲಿ 90.00 ಕಿ.ಮೀ. ಉದ್ದದ ವಿತರಣಾ ಜಾಲ ಮತ್ತು 1700 ಸಂಖ್ಯೆ ಗೃಹ ಸಂಪರ್ಕ ಕಲ್ಪಿಸುವ ಕಾಮಗಾರಿಯನ್ನು ಪೂರ್ಣಗೊಳಿಸಿ, 2017 ರಲ್ಲಿ ನಗರಸಭೆ, ಬೀದರ ರವರಿಗೆ ಹಸ್ತಾಂತರಿಸಲಾಗಿರುತ್ತದೆ.<br><br>ಕೇಂದ್ರ ಪುರಸ್ಕೃತ ಅಮೃತ್ ಯೋಜನೆಯಡಿ ವಲಯ-1, ವಲಯ-2 ಮತ್ತು ವಲಯ-3 ರಲ್ಲಿ ಬಿಟ್ಟು ಹೋದ ಪ್ರದೇಶಗಳಲ್ಲಿ ಒಳಚರಂಡಿ ಕಾಮಗಾರಿಯನ್ನು ಕೈಗೆತ್ತಿಕೊಳ್ಳಲಾಗಿದ್ದು, ವಿವರಗಳು ಈ ಕೆಳಗಿನಂತಿವೆ.<br><br>**ಅ) ವಲಯ-2 ಕ್ಕೆ ಒಳಚರಂಡಿ ಯೋಜನೆ: (ಅಂದಾಜು ಮೊತ್ತ ರೂ.11600.00 ಲಕ್ಷಗಳು)**<br>1. 133.00 ಕಿ.ಮೀ. ಉದ್ದದ ಒಳಚರಂಡಿ ಕೊಳವೆ ಮಾರ್ಗ ಅಳವಡಿಸಲಾಗಿದೆ,<br>2. 12109 ಗೃಹ ಸಂಪರ್ಕ ಜೋಡಣೆಗಳನ್ನು ಕಲ್ಪಿಸಲಾಗಿದೆ.<br>3. ಅಮಲಾಪೂರ್ ನಾಲಾದಲ್ಲಿ 01 ಮತ್ತು ನ್ಯೂ ಆದರ್ಶ ಕಾಲೋನಿಯಲ್ಲಿ 01 ವೆಟ್‌ವೆಲ್ ನಿರ್ಮಿಸಲಾಗಿದೆ.<br>4. ಗೋರನಳ್ಳಿ(ಬಿ) ಗ್ರಾಮದ ವ್ಯಾಪ್ತಿಯಲ್ಲಿ 17.26 ಎಂ.ಎಲ್.ಡಿ. ಸಾಮರ್ಥ್ಯದ ಮಲೀನ ನೀರು ಸಂಸ್ಕರಣಾ ಘಟಕ ನಿರ್ಮಿಸಲಾಗಿದೆ.<br><br>ಸದರಿ ಕಾಮಗಾರಿಯು ಡಿಸೆಂಬರ್-2019 ರಲ್ಲಿ ಪೂರ್ಣಗೊಳಿಸಿ ಚಾಲನೆಗೊಳಿಸಲಾಗಿದೆ.<br><br>**ಆ) ವಲಯ-3 ಕ್ಕೆ ಒಳಚರಂಡಿ ಯೋಜನೆ (ಹೆಚ್ಚುವರಿ ಅನುದಾನ) : (ಅಂದಾಜು ಮೊತ್ತ ರೂ.5779.00 ಲಕ್ಷಗಳು)**<br>1. 64.00 ಕಿ.ಮೀ. ಉದ್ದದ ಒಳಚರಂಡಿ ಕೊಳವೆ ಮಾರ್ಗ ಅಳವಡಿಸಲಾಗಿದೆ, |

2. 6060 ಗೃಹ ಸಂಪರ್ಕ ಜೋಡಣೆಗಳನ್ನು ಕಲ್ಪಿಸಲಾಗಿದೆ.
3. 01 ವೆಟ್‌ವೆಲ್ ಮತ್ತು ನೌಬಾದ ಗ್ರಾಮದ ವ್ಯಾಪ್ತಿಯಲ್ಲಿ 7.00 ಎಂ.ಎಲ್.ಡಿ. ಸಾಮರ್ಥ್ಯದ ಮಲೀನ ನೀರು ಸಂಸ್ಕರಣಾ ನಿರ್ಮಿಸುವ ಕಾಮಗಾರಿಗಳು ಪ್ರಗತಿಯಲ್ಲಿವೆ.

**ಇ). ವಲಯ-3 & 1 ರ ಬಿಟ್ಟು ಹೋದ ಪ್ರದೇಶಗಳಲ್ಲಿ ಒಳಚರಂಡಿ ಯೋಜನೆ (ಉಳಿತಾಯ): (ಅಂದಾಜು ಮೊತ್ತ ರೂ.1770.67 ಲಕ್ಷಗಳು)**

38.91 ಕಿ.ಮೀ. ಉದ್ದದ ಒಳಚರಂಡಿ ಕೊಳವೆ ಮಾರ್ಗ ಅಳವಡಿಸಲು ಹಾಗೂ 2300 ಗೃಹ ಸಂಪರ್ಕ ಜೋಡಣೆ ಕಲ್ಪಿಸಲು ಟೆಂಡರನಲ್ಲಿ ಅವಕಾಶ ಕಲ್ಪಿಸಲಾಗಿದೆ. ಸದರಿ ಯೋಜನೆಯ ಕಾಮಗಾರಿಗಳು ಪ್ರಗತಿಯಲ್ಲಿವೆ.

**ಕೆ.ಯು.ಐ.ಡಿ.ಎಫ್.ಸಿ ವತಿಯಿಂದ**

ಏಷ್ಯಿಯನ್ ಅಭಿವೃದ್ಧಿ ಬ್ಯಾಂಕ್ ನೆರವಿನ ಉತ್ತರ ಕರ್ನಾಟಕ ನಗರ ವಲಯ ಬಂಡವಾಳ ಹೂಡಿಕಾ ಕಾರ್ಯಕ್ರಮದಡಿಯಲ್ಲಿ (ಎನ್‌ಕೆಯುಎಸ್‌ಐಪಿ) ಬೀದರ್ ನಗರಕ್ಕೆ ಅನುಮೋದಿತ ಅನುದಾನಕ್ಕೆ ಅನುಗುಣವಾಗಿ ಒಳಚರಂಡಿ ಯೋಜನೆಯನ್ನು ಎರಡು ಪ್ಯಾಕೇಜುಗಳಲ್ಲಿ ಕೈಗೊಳ್ಳಲಾಗಿದ್ದು, ವಿವರ ಈ ಕೆಳಕಂಡಂತಿದೆ:

1. ಪ್ಯಾಕೇಜ್ ಸಂಖ್ಯೆ 02 ಬಿಡಿಆರ್ 02: ಈ ಕಾಮಗಾರಿಯಡಿ ಒಳಚರಂಡಿ ಜಾಲ ಅಳವಡಿಕೆ ಹಾಗೂ ತ್ಯಾಜ್ಯ ನೀರು ಸಂಸ್ಕರಣ ಘಟಕ ನಿರ್ಮಾಣ ಕಾಮಗಾರಿ ರೂ.39.80 ಕೋಟಿಗೆ ಮೆ//ಅಯ್ಯಪ್ಪಾ ಇನ್ಫ್ರಾ ಪ್ರಾಜೆಕ್ಟ್ಸ್ ಮತ್ತು ಮೆ// ಮೇಘಾ ಇನ್ಫ್ರಾಸ್ಟ್ರಕ್ಚರ್ಸ್ (ಜಿ.ವಿ) ಹೈದರಾಬಾದ್ ಇವರಿಗೆ ದಿನಾಂಕ 22/07/2011 ರಂದು ಗುತ್ತಿಗೆ ನೀಡಲಾಗಿರುತ್ತದೆ. ಕಾಮಗಾರಿಯು ಜುಲೈ 2018ಕ್ಕೆ ಪೂರ್ಣಗೊಳಿಸಿ ಕಾರ್ಯಗತ ಗೊಳಿಸಲಾಗಿದೆ. ಸದರಿ ಆಸ್ತಿಯನ್ನು ನಗರಸಭೆಗೆ ಮುಂದಿನ ನಿರ್ವಾಹಣಗೆ ಹಸ್ತಾಂತರಿಸಿದೆ. ಕಾಮಗಾರಿಯನ್ನು ರೂ.42.8 ಕೋಟಿಗೆ ಪರಿಷ್ಕರಿಸಲಾಗಿ, ಕಾಮಗಾರಿ ಕೈಗೊಂಡ ವಿವರ ಕೆಳಕಂಡಂತಿರುತ್ತದೆ.
   - ಒಳಚರಂಡಿ ಜಾಲ : 49.50 ಕಿ.ಮೀ
   - ತ್ಯಾಜ್ಯ ನೀರು ಸಂಸ್ಕರಣ ಘಟಕ 17.26 MLD.
   - ಮ್ಯಾನ್ ಹೋಲ್ : 1626.
   - ಜಲತ್ಯಾಜ್ಯ ಪಡೆಯುವ ಚೆಂಬರ್ 2110.
   - ವೆಟ್ ವೆಲ್ : ೧
   - ಎಲ್ಕೆಟ್ರೋ ಮೆಕ್ಯಾನಿಕಲ್ ಉಪಕರಣಗಳ ಕಾಮಗಾರಿ ವೆಚ್ಚ ರೂ.35.84 ಕೋಟಿ.

| | | |
|---|---|---|
| | | 2. ಪ್ಯಾಕೇಜ್ ಸಂಖ್ಯೆ 03 ಬಿಡಿಆರ್ 02 ಹೆಚ್ಚುವರಿಯಾಗಿ ಒಳಚರಂಡಿ ವ್ಯವಸ್ಥೆ ವಿಸ್ತರಣೆ ಕಾಮಗಾರಿ ರೂ.19.01 ಕೋಟಿಗೆ ಮೆ//ಗುರುನಾಥ ಕೊಳ್ಳೂರ ಇವರಿಗೆ ದಿನಾಂಕ 27/05/2014 ರಂದು ಗುತ್ತಿಗೆ ನೀಡಲಾಗಿದೆ. ಕಾಮಗಾರಿಯು ದಿನಾಂಕ 05/06/2017 ರಂದು ಪೂರ್ಣಗೊಳಿಸಿ ಅಂದೇ ಮುಂದಿನ ನಿರ್ವಾಹಣೆಗೆ ನಗರಸಭೆಗೆ ಹಸ್ತಾಂತರಿಸಿದೆ. ಕಾಮಗಾರಿಯನ್ನು ರೂ.17.97 ಕೋಟಿಗೆ ಪರಿಷ್ಕರಿಸಲಾಗಿ ಕಾಮಗಾರಿಗಳ ವಿವರ ಕೆಳಕಂಡಂತಿದೆ:<br>• ಒಳಚರಂಡಿ ಜಾಲ : 33.45 ಕಿ.ಮೀ.<br>• ಮ್ಯಾನ್ ಹೋಲ್ : 1076.<br>• ಜಲತ್ಯಾಜ್ಯ ಪಡೆಯುವ ಚೆಂಬರ್ 179.<br>• ತ್ಯಾಜ್ಯ ನೀರು ರೇಚಕ ಯಂತ್ರ ಸ್ಥಾವರ (Sewage Pumping Station)<br>• ಎಲ್ಕೆಟ್ರೋ ಮೆಕ್ಯಾನಿಕಲ್ ಉಪಕರಣಗಳ ಕಾಮಗಾರಿ ವೆಚ್ಚ ರೂ.17.97 ಕೋಟಿ.<br><br>ಬೀದರ್ ನಗರಕ್ಕೆ ಕುಡಿಯುವ ನೀರು ಪೂರೈಕೆ ಕಾಮಗಾರಿಯನ್ನು 3 ಪ್ಯಾಕೇಜುಗಳಲ್ಲಿ ಹಮ್ಮಿಕೊಳ್ಳಲಾಗಿದೆ. ವಿವರ ಈ ಕೆಳಕಂಡಂತಿದೆ.<br>ಪ್ಯಾಕೇಜು ಸಂಖ್ಯೆ 02 ಬಿಡಿಆರ್ 01: ಸಗಟು ನೀರು ಸರಬರಾಜು ಅಭಿವೃದ್ಧಿಪಡಿಸುವ ಕಾಮಗಾರಿಯನ್ನು ರೂ.28.03 ಕೋಟಿಗೆ ಮೆ\|\|ಮೆಘ ಇಂಜಿನೀಯರಿಂಗ್ ರವರಿಗೆ ದಿನಾಂಕ 30/04/2011 ರಂದು ಗುತ್ತಿಗೆ ನೀಡಲಾಗಿತ್ತು. ಕಾಮಗಾರಿ ದಿನಾಂಕ 31/10/2016 ರಂದು ಪೂರ್ಣಗೊಳಿಸಿ ನಗರಸಭೆಗೆ ಹಸ್ತಾಂತರಿಸಲಾಗಿದೆ. ಕಾಮಗಾರಿಯನ್ನು ರೂ.27.14 ಕೋಟಿಗೆ ಪರಿಷ್ಕರಿಸಲಾಗಿದೆ. ಕಾಮಗಾರಿ ವಿವರ:<br>1. 28 ಎಂಎಲ್‌ಡಿ ನೀರು ಶುದ್ಧೀಕರಣ ಘಟಕ ನಿರ್ಮಯಿಸುವುದು ಹಾಗೂ ಪಂಪಿಂಗ್ ಮೆಷಿನರಿ ಅಳವಡಿಸುವುದು, 6.5 ಕಿ.ಮಿ ಎಂ.ಎಸ್ ಏರು ಕೊಳವೆ ಮತ್ತು 12.3 ಕಿಮಿ ಪಿಎಸ್‌ಸಿ ಗುರುತ್ವಾಕರ್ಶಣ ಕೊಳವೆಗಳನ್ನು ಮೂಲ ಸ್ಥಾವರದಿಂದ ಬೀದರ್ ನಗರದವರೆಗೆ ಅಳವಡಿಸುವ ಕಾಮಗಾರಿ ಪೂರ್ಣ ಗೊಂಡಿದ್ದು, ನಗರಸಭೆಗೆ ಹಸ್ತಾಂತರಿಸ ಲಾಗಿದೆ. ವೆಚ್ಚವಾಗಿರುವ ಮೊತ್ತ ರೂ.26.77 ಕೋಟಿ<br>2. ಪ್ಯಾಕೇಜು ಸಂಖ್ಯೆ 02 ಬಿಡಿಆರ್ 01ಎ ಹಾಲಿ ಇರುವ ನೀರು ವಿತರಣಾ ಜಾಲವನ್ನು ಪುನರ್ಜೀವನಗೊಳಿಸುವ ಕಾಮಗಾರಿ ರೂ.27.58 ಕೋಟಿಗೆ ಮೆ\|\|ಮೆಘ ಇಂಜಿನೀಯರಿಂಗ್ ರವರಿಗೆ ದಿನಾಂಕ 30/04/2011 ರಂದು ಗುತ್ತಿಗೆ ನೀಡಲಾಗಿತ್ತು. ಕಾಮಗಾರಿ ದಿನಾಂಕ 07/09/2016 ರಂದು ಪೂರ್ಣಗೊಳಿಸಿ ನಗರಸಭೆಗೆ ಹಸ್ತಾಂತರಿಸಲಾಗಿದೆ. |

| | | |
|---|---|---|
| | | ಕಾಮಗಾರಿಯನ್ನು ರೂ.27.19 ಕೋಟಿಗೆ ಪರಿಷ್ಕರಿಸಲಾಗಿದೆ ಕಾಮಗಾರಿ ವಿವರ ಕೆಳಕಂಡಂತಿವೆ:<br>• 153 ಕಿಮಿ ನೀರು ವಿತರಣಾ ಜಾಲ, 7 ಮೇಲತ್ತೊಟ್ಟಿಗಳ ನಿರ್ಮಾಣ ಮತ್ತು ಅವುಗಳಿಗೆ ನೀರು ತುಂಬುವ ಮುಖ್ಯ ಕೊಳವೆ (Feeder Main) 17.21 ಕಿಮಿ. ಕಾಮಗಾರಿ ಪೂರ್ಣಗೊಂಡಿದ್ದು, ನಗರಸಭೆಗೆ 2016 ರಲ್ಲಿ ಹಸ್ತಾಂತರಿಸಲಾಗಿದೆ.<br>• ವೆಚ್ಚವಾಗಿರುವ ಮೊತ್ತ ರೂ.26.62 ಕೋಟಿ.<br><br>3) ಪ್ಯಾಕೇಜು ಸಂಖ್ಯೆ 04 ಬಿಡಿಆರ್ 01 24/7 ನಿರಂತರ ನೀರು ಸರಬರಾಜು ಯೋಜನೆ ರೂ.42.92 ಕೋಟಿಗೆ ಮೆ॥ವಿಶ್ವರಾಜ್ ಇನ್ಫ್ರಾಸ್ಟ್ರಕ್ಚರ್ಸ್ ರವರಿಗೆ ದಿನಾಂಕ 30/01/2015 ರಂದು ಗುತ್ತಿಗೆ ನೀಡಲಾಗಿತ್ತು. ಕಾಮಗಾರಿ ದಿನಾಂಕ 30/08/2018 ರಂದು ಪೂರ್ಣಗೊಳಿಸಿದೆ. ಕಾಮಗಾರಿಯನ್ನು ರೂ.34.11 ಕೋಟಿಗೆ ಪರಿಷ್ಕರಿಸಲಾಗಿದೆ. ಕಾಮಗಾರಿ ವಿವರ:<br>133.5 ಕಿಮಿ ವಿತರಣಾ ಜಾಲ ಮತ್ತು 29246 ಮನೆಗಳಿಗೆ ನಳ ಸಂಪರ್ಕ ನೀಡುವ ಕಾಮಗಾರಿ ಪೂರ್ಣಗೊಂಡಿದೆ. ಸದ್ಯ ಕಾರ್ಯಾಚರಣೆ ಮತ್ತು ನಿರ್ವಹಣೆಯನ್ನು ಗುತ್ತಿಗೆದಾರರು ಕರಾರಿನಂತೆ ನಿರ್ವಹಿಸುತ್ತಿದ್ದಾರೆ. ಕಾಮಗಾರಿ ವೆಚ್ಚ ರೂ.32.82 ಕೋಟಿ. ಅಂತಿಮ ಬಿಲ್ ಪರಿಶೀಲನೆ ಹಂತದಲ್ಲಿದೆ ಕೆ.ಯು.ಐ.ಡಿ.ಎಫ್.ಸಿ ರವರು ವರದಿ ಮಾಡಿರುತ್ತಾರೆ. |
| ಆ) | ಒಳಚರಂಡಿ ನಿರ್ಮಾಣ ಹಂತ 1ರ ಕಾಮಗಾರಿ ಯಾವ ಹಂತದಲ್ಲಿದೆ ಹಾಗೂ ಪೂರ್ಣಗೊಂಡಿದ್ದ ಕಡೆಗಳಲ್ಲಿ ಸಾರ್ವಜನಿಕರಿಗೆ ಸರಿಯಾಗಿ ಉಪಯೋಗಕ್ಕೆ ಇಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ಯೋಜನೆ ವಿಫಲವಾಗಲು ಕಾರಣಗಳೇನು; (ವಿವರ ಒದಗಿಸುವುದು) | **ಒಳಚರಂಡಿ ನಿರ್ಮಾಣ ಹಂತ-1 ರ ಕಾಮಗಾರಿಗಳನ್ನು ಕೆ.ಯು.ಐ.ಡಿ.ಎಫ್.ಸಿ ವತಿಯಿಂದ ಕೈಗೊಳ್ಳಲಾಗಿದೆ. ವಿವರಗಳು ಈ ಕೆಳಕಂಡಂತಿದೆ.**<br>ಸದರಿ ಯೋಜನೆ ಅನುಮೋದನೆಯಂತೆ ಪೂರ್ಣಗೊಂಡು ಸಾರ್ವಜನಿಕರ ಬಳಕೆಗೆ ಹಾಗೂ ಮುಂದಿನ ನಿರ್ವಹಣೆಗೆ ಈಗಾಗಲೇ ನಗರಸಭೆಗೆ ಹಸ್ತಾಂತರಿಸಿದೆ. ಈ ಯೋಜನೆಯಲ್ಲಿ ಮನೆ ಸಂಪರ್ಕ ನೀಡುವ ಕಾಮಗಾರಿ ಒಳಗೊಂಡಿರುವುದಿಲ್ಲ. ಬಳಕೆದಾರರು 3489 ಮನೆಗಳಿಗೆ ಒಳಚರಂಡಿ ಸಂಪರ್ಕ ಕಲ್ಪಿಸಿಕೊಂಡಿದ್ದು, ಇದರ ಪ್ರಯೋಜನವನ್ನು ಪಡೆಯುತ್ತಿರುತ್ತಾರೆ. ಇನ್ನು ಬಳಕೆದಾರರು ತಮ್ಮ ಸ್ವಂತ ಖರ್ಚಿನಲ್ಲಿ ನಗರಸಭೆಯ ಅನುಮತಿಪಡೆದು ಒಳಚರಂಡಿ ಮನೆ ಸಂಪರ್ಕವನ್ನು ಪಡೆಯಬೇಕಾಗಿರುತ್ತದೆ. ಆದ್ದರಿಂದ ಬಳಕೆದಾರರ ಮನ ಒಲಿಸಿ ಒಳಚರಂಡಿ ಮನೆ ಸಂಪರ್ಕವನ್ನು ನಗರಸಭೆಯವರು ತ್ವರಿತವಾಗಿ ಅನುಷ್ಠಾನಗೊಳಿಸಬೇಕಾಗಿದೆ ಹಾಗು ಪ್ರಗತಿಯಲ್ಲಿದೆ. |

| | | |
|---|---|---|
| | | ಎಸ್.ಟಿ.ಪಿ ಅವಶ್ಯಕತೆಗೆ ಅನುಗುಣವಾಗಿ ಕರ್ಯಚರಣೆಮಾಡುತ್ತಿದೆ. ಯೋಜನೆಯು ಚಾಲ್ತಿಯಲ್ಲಿರುವುದರಿಂದ ವಿಫಲಗೊಂಡಿರುವುದಿಲ್ಲ. |
| ಇ) | ಅಮೃತ ಯೋಜನೆ ಅಡಿಯಲ್ಲಿ 3ರ ಹಂತಗಳಲ್ಲಿನ ಕಾಮಗಾರಿಗಳ ಪೈಕಿ ಕೈಗೆತ್ತಿಕೊಂಡ ಕಾಮಗಾರಿಗಳು ಪೂರ್ಣಗೊಂಡಿದೆಯೇ; ಕಾಮಗಾರಿ ಪೂರ್ಣಗೊಂಡಿದ್ದಲ್ಲಿ, ಇದಕ್ಕೆ ತಗುಲಿದ ವೆಚ್ಚ ಎಷ್ಟು; ಈ ಕಾಮಗಾರಿಗಳ ನಿರ್ವಹಣೆ ಸರಿಯಾದ ರೀತಿಯಲ್ಲಿ ಆಗದೇ ಇರುವುದಕ್ಕೆ ಕಾರಣಗಳೇನು ; (ಸ್ಪಷ್ಟ ವಿವರ ನೀಡುವುದು) | ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ವತಿಯಿಂದ ಕೇಂದ್ರ ಪುರಸ್ಕೃತ ಅಮೃತ್ ಯೋಜನೆಯಡಿ ವಲಯ-2 ಮತ್ತು 3 ರಲ್ಲಿ ಒಳಚರಂಡಿ ಕಾಮಗಾರಿಗಳನ್ನು ಕೈಗೊಂಡಿದ್ದು, ವಿವರಗಳು ಈ ಕೆಳಗಿನಂತಿವೆ.<br><br>ವಲಯ- 2 ರ ಒಳಚರಂಡಿ ಕಾಮಗಾರಿಗಳು ಪೂರ್ಣಗೊಂಡಿದ್ದು, ನವೆಂಬರ್-2021 ರ ಅಂತ್ಯದವರೆಗೆ ರೂ.9813.61 ಲಕ್ಷಗಳು ವೆಚ್ಚವಾಗಿರುತ್ತದೆ. ಸದರಿ ಯೋಜನೆಯನ್ನು ಮುಂದಿನ ನಿರ್ವಹಣೆಗಾಗಿ ನಗರಸಭೆ, ಬೀದರ ರವರಿಗೆ ಹಸ್ತಾಂತರಿಸಲಾಗಿದೆ.<br><br>ವಲಯ-3 ಮತ್ತು ವಲಯ-1 ರಲ್ಲಿ ಬಿಟ್ಟು ಹೋದ ಪ್ರದೇಶಗಳಲ್ಲಿ ಒಳಚರಂಡಿ ಕಾಮಗಾರಿಗಳು ಪ್ರಗತಿಯಲ್ಲಿವೆ. ನವೆಂಬರ್-2021 ರ ಅಂತ್ಯದವರೆಗೆ ರೂ. 4133.56 ಲಕ್ಷಗಳು ವೆಚ್ಚವಾಗಿರುತ್ತದೆ. |
| ಈ) | ನಗರಕ್ಕೆ ಸಮರ್ಪಕವಾಗಿ ಕುಡಿಯುವ ನೀರನ್ನು ಪೂರೈಕೆ ಮಾಡಲು ಎಷ್ಟು ಹಂತದ ಕಾಮಗಾರಿಗಳನ್ನು ಕೈಗೊಳ್ಳಲಾಗಿದೆ; ಈ ಕಾಮಗಾರಿಗಳಿಗೆ ಎಷ್ಟು ವೆಚ್ಚ ಮಾಡಲಾಗಿದೆ; ಈ ಕಾಮಗಾರಿಗಳು ಯಾವ ಯಾವ ಹಂತದಲ್ಲಿದೆ; (ಕಾಮಗಾರಿವಾರು ಸಂಪೂರ್ಣ ಮಾಹಿತಿ ನೀಡುವುದು) | ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ವತಿಯಿಂದ ಬೀದರ್ ನಗರದಲ್ಲಿ ನೀರು ಸರಬರಾಜು ವ್ಯವಸ್ಥೆ ಕಲ್ಪಿಸಲು ನಗರದ 5 ವಲಯ (1,2,3,7 ಮತ್ತು 8) ಗಳಲ್ಲಿ 90.00 ಕಿ.ಮೀ. ಉದ್ದದ ವಿತರಣಾ ಜಾಲ ಮತ್ತು 1700 ಸಂಖ್ಯೆ ಗೃಹ ಸಂಪರ್ಕ ಕಲ್ಪಿಸುವ ಕಾಮಗಾರಿಯನ್ನು ಪೂರ್ಣಗೊಳಿಸಿ, 2017 ರಲ್ಲಿ ನಗರಸಭೆ, ಬೀದರ ರವರಿಗೆ ಹಸ್ತಾಂತರಿಸಲಾಗಿರುತ್ತದೆ. ನವೆಂಬರ್-2021 ರ ಅಂತ್ಯದವರೆಗೆ ರೂ.2284.90 ಲಕ್ಷಗಳು ವೆಚ್ಚವಾಗಿರುತ್ತದೆ.<br><br>ಕೆ.ಯು.ಐ.ಡಿ.ಎಫ್.ಸಿ ವತಿಯಿಂದ ಬೀದರ್ ನಗರಕ್ಕೆ ಕುಡಿಯುವ ನೀರ ಪೂರೈಕೆಗೆ 3 ಪ್ಯಾಕೇಜುಗಳಲ್ಲಿ ಹಮ್ಮಿಕೊಳ್ಳಲಾಗಿದೆ. ವಿವರ ಈ ಕೆಳಕಂಡಂತಿದೆ.<br><br>1. ಪ್ಯಾಕೇಜು ಸಂಖ್ಯೆ 02 ಬಿಡಿಆರ್ 01: ಸಗಟು ನೀರು ಸರಬರಾಜು ಅಭಿವೃದ್ಧಿಪಡಿಸುವ ಕಾಮಗಾರಿ ರೂ.28.03 ಕೋಟಿಗೆ ಮೆ\|\| ಮೆಘ ಇಂಜಿನೀಯರಿಂಗ್ ರವರಿಗೆ ದಿನಾಂಕ 30/04/2011 ರಂದು ಗುತ್ತಿಗೆ ನೀಡಲಾಗಿತ್ತು. ಕಾಮಗಾರಿ ದಿನಾಂಕ 31/10/2016 ರಂದು ಪೂರ್ಣಗೊಳಿಸಿ ನಗರಸಭೆಗೆ ಹಸ್ತಾಂತರಿಸಲಾಗಿದೆ. ಕಾಮಗಾರಿಯನ್ನು ರೂ.27.14 ಕೋಟಿಗೆ ಪರಿಷ್ಕರಿಸಲಾಗಿ ಕಾಮಗಾರಿ ವಿವರ: |

| | | |
|---|---|---|
| | | • 28 ಎಂಎಲ್‌ಡಿ ನೀರು ಶುದ್ಧೀಕರಣ ಘಟಕ ನಿರ್ಮಿಸುವುದು ಹಾಗೂ ಪಂಪಿಂಗ್ ಮೆಷಿನರಿ ಅಳವಡಿಸುವುದು, 6.5 ಕಿಮಿ ಎಂ.ಎಸ್ ಏರು ಕೊಳವೆ ಮತ್ತು 12.3 ಕಿಮಿ ಪಿಎಸ್‌ಸಿ ಗುರುತ್ವಾಕರ್ಶಣ ಕೊಳವೆಗಳನ್ನು ಮೂಲ ಸ್ಥಾವರದಿಂದ ಬೀದರ್ ನಗರದವರೆಗೆ ಅಳವಡಿಸುವ ಕಾಮಗಾರಿ ಯಶಸ್ವಿಯಾಗಿ ಪೂರ್ಣಗೊಂಡಿದ್ದು ಚಾಲ್ತಿಯಲ್ಲಿರುತ್ತದೆ. ನಗರಸಭೆಗೆ ಹಸ್ತಾಂತರಿಸಲಾಗಿದೆ.<br>2. ಪ್ಯಾಕೇಜು ಸಂಖ್ಯೆ 02 ಬಿಡಿಆರ್ 01ಎ: ಹಾಲಿ ಇರುವ ನೀರು ವಿತರಣಾ ಜಾಲವನ್ನು ಪುರ್ನಜೀವನಗೊಳಿಸುವ ಕಾಮಗಾರಿ ರೂ.27.58 ಕೋಟಿಗೆ ಮೆ\|\|ಮೆಘ ಇಂಜಿನೀಯರಿಂಗ್ ರವರಿಗೆ ದಿನಾಂಕ 30/04/2011 ರಂದು ಗುತ್ತಿಗೆ ನೀಡಲಾಗಿತ್ತು. ಕಾಮಗಾರಿ ದಿನಾಂಕ 07/09/2016 ರಂದು ಪೂರ್ಣಗೊಳಿಸಿ ನಗರಸಭೆಗೆ ಹಸ್ತಾಂತರಿಸಲಾಗಿದೆ. ಕಾಮಗಾರಿಯನ್ನು ರೂ.27.19 ಕೋಟಿಗೆ ಪರಿಷ್ಕರಿಸಲಾಗಿದೆ ಕಾಮಗಾರಿ ವಿವರ ಕೆಳಕಂಡಂತಿವೆ:<br>• 153 ಕಿಮಿ ನೀರು ವಿತರಣಾ ಜಾಲ, 7 ಮೇಲತೊಟ್ಟಿಗಳ ನಿರ್ಮಾಣ ಮತ್ತು ಅವುಗಳಿಗೆ ನೀರು ತುಂಬುವ ಮುಖ್ಯ ಕೊಳವೆ (Feeder main) 17.21 ಕಿಮಿ. ಕಾಮಗಾರಿ ಯಶಸ್ವಿಯಾಗಿ ಪೂರ್ಣಗೊಂಡಿದ್ದು, ಚಾಲ್ತಿಯಲ್ಲಿರುತ್ತದೆ ಹಾಗೂ ನಗರಸಭೆಗೆ ಹಸ್ತಾಂತರಿಸಲಾಗಿದೆ.<br>3. ಪ್ಯಾಕೇಜು ಸಂಖ್ಯೆ 04 ಬಿಡಿಆರ್ 01: 24x7 ನಿರಂತರ ನೀರು ಸರಬರಾಜು ಯೋಜನೆ ರೂ.42.92 ಕೋಟಿಗೆ ಮೆ\|\| ವಿಶ್ವರಾಜ್ ಇನ್ಫ್ರಾಸ್ಟ್ರಕರ್ಸ್ ರವರಿಗೆ ದಿನಾಂಕ 30/01/2015 ರಂದು ಗುತ್ತಿಗೆ ನೀಡಲಾಗಿತ್ತು. ಕಾಮಗಾರಿ ದಿನಾಂಕ 30/08/2018 ರಂದು ಪೂರ್ಣಗೊಳಿಸಿದೆ. ಕಾಮಗಾರಿಯನ್ನು ರೂ.34.11 ಕೋಟಿಗೆ ಪರಿಷ್ಕರಿಸಲಾಗಿದೆ. ಕಾಮಗಾರಿ ವಿವರ:<br><br>133.5 ಕಿಮಿ ವಿತರಣಾ ಜಾಲ ಮತ್ತು 29246 ಮನೆಗಳಿಗೆ ನಳ ಸಂಪರ್ಕ ನೀಡುವ ಕಾಮಗಾರಿ ಪೂರ್ಣಗೊಂಡಿದೆ ಹಾಗೂ ಚಾಲ್ತಿಗೊಳಿಸಲಾಗಿದೆ. ಸದ್ಯ ಕಾರ್ಯಾಚರಣೆ ಮತ್ತು ನಿರ್ವಹಣೆಯನ್ನು ಗುತ್ತಿಗೆದಾರರು ಕರಾರಿನಂತೆ ನಿರ್ವಹಿಸುತ್ತಿದ್ದಾರೆ. |
| ಉ) | ಈ ಯೋಜನೆ ಅಡಿಯಲ್ಲಿ ಪ್ರತಿದಿನ ಕುಡಿಯುವ ನೀರು ಲಭ್ಯವಾಗದಿರಲು ಕಾರಣಗಳೇನು; ಪ್ರತಿದಿನ ಕುಡಿಯುವ ನೀರು ಪೂರೈಕೆ ಮಾಡಲು ಸರ್ಕಾರ | ಬೀದರ್ ನಗರಕ್ಕೆ ವಿನ್ಯಾಸದಂತೆ ಸಗಟು ನೀರು ಸರಬರಾಜು 44 ಎಂಎಲ್‌ಡಿ ಅವಶ್ಯಕತೆ ಇರುತ್ತದೆ. ಮೊದಲೇ ಇದ್ದ ಮಾಂಜ್ರ ಜಲಾಶಯದಿಂದ ಬರುತ್ತಿದ್ದ 16 ಎಂಎಲ್‌ಡಿ ನೀರನ್ನು ಮುಂದುವರೆಸಲು ಪರಿಗಣಿಸಿ ಉಳಿದ ಬೇಡಿಕೆಗೆ ಅಂದರೆ 28 ಎಂಎಲ್‌ಡಿ ನೀರನ್ನು ಕಾರಾಂಜ |

| | | |
|---|---|---|
| | ಕೈಗೊಂಡಿರುವ ಶಾಶ್ವತ ಕ್ರಮಗಳೇನು? (ಸಂಪೂರ್ಣ ವಿವರ ನೀಡುವುದು) | ಜಲಾಶಯ ಮೂಲದಿಂದ ನೀರನ್ನು ಪಂಪುಮಾಡಲು ಯೋಜನೆಯನ್ನು ರೂಪಿಸಿ ಆಯೋಜಿಸಲಾಗಿತ್ತು. ಅದರಂತೆ 2016 ರಲ್ಲಿ ಚಾಲನೆಗೊಳಿಸಲಾಯಿತು.<br>2016 ನೇ ಇಸವಿಯಲ್ಲಿ ಮಾಂಜ್ರ ನದಿಯು ಬೇಸಿಗೆಯಲ್ಲಿ ಸಾಕಷ್ಟು ನೀರು ಲಭ್ಯವಿಲ್ಲದ ಕಾರಣ ಈ ಮೂಲದ ನೀರು ಸರಬರಾಜನ್ನು ಕೆಯುಡಬ್ಲ್ಯೂಎಸ್‌ಡಿಬಿ ವತಿಯಿಂದ ಸ್ಥಗಿತಗೊಳಿಸಿರುತ್ತಾರೆ. ಈಗ ಕಾರಾಂಜ ಜಲಾಶಯ ಮೂಲ ಒಂದರಿಂದಲೇ 28 ಎಂಎಲ್‌ಡಿ ಪಂಪ್ ಮಾಡಲು ಅವಕಾಶವಿದ್ದರೂ ವಿದ್ಯುತ್ ವೆತ್ಯಯ ಹಾಗೂ ಇತರೆ ಕಾರಣಗಳಿಂದ 22 ರಿಂದ 23 ಎಂಎಲ್‌ಡಿ ನೀರನ್ನು ಬೀದರ್ ನಗರಕ್ಕೆ ಪಂಪ್ ಮಾಡಲಾಗುತ್ತಿತದೆ. ಇದು ಅವಶ್ಯಕತೆಗಿಂತ ಕಡಿಮೆ ಇರುತ್ತದೆ. ಈ ಮೇಲಿನ ಕಾರಣದಿಂದ ಬೀದರ್ ನಗರಕ್ಕೆ ಸಗಟು ನೀರು ಸರಬರಾಜುವಿನಲ್ಲಿ ಅವಶ್ಯಕತೆಗಿಂತ ಕಡಿಮೆಯಾಗಿರುತ್ತದೆ. ಹಾಲಿ ಪಂಪು ಮಾಡುತ್ತಿರುವ ನೀರನ್ನು ಬೀದರ್ ನಗರದ ಕೆಲವು ಬಳಕೆದಾರರಿಗೆ ದಿನ ಬಿಟ್ಟು ದಿನ Intermittent ನೀರು ಸರಬರಾಜು ಮಾಡಲಾಗುತ್ತಿದೆ. ಉಳಿದಂತೆ ಪ್ರತಿ ದಿನ ನೀರು ಸರಬರಾಜು ಆಗುತ್ತದೆ. ಈ ವ್ಯತ್ಯೆಯವನ್ನು ಮಾರ್ಪಡಿಸಿ ಪಂಪುಗಳನ್ನು (3 ಹಂತದಲ್ಲಿ) ಅಳವಡಿಸಲು ಹಾಗೂ ನಗರದ ಫೀಡರ್ ಲೈನ್ ಉನ್ನತೀಕರಿಸಲು ಸುಮಾರು ರೂ.25.00 ಕೋಟಿ ಹಣಕಾಸಿನ ಅವಶ್ಯಕತೆ ಇದೆ ಎಂದು ಅಂದಾಜು ಮಾಡಲಾಗಿದೆ. ಆದರೆ ಇದರ ತಾಂತ್ರಿಕ ಸಧೃಡತೆ ಹಾಗೂ ವಿನ್ಯಾಸಗಳನ್ನು ಪರಿಶೀಲಿಸಿದ ನಂತರ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಲಾಗುವುದೆಂದು ಕೆ.ಯು.ಐ.ಡಿ.ಎಫ್.ಸಿ ರವರು ವರದಿ ಮಾಡಿರುತ್ತಾರೆ. |

ಸಂಖ್ಯೆ: ನಅಇ 212 ಯುಎಂಎಸ್ 2021

(ಬಿ.ಎ.ಬಸವರಾಜ)
ನಗರಾಭಿವೃದ್ಧಿ ಸಚಿವರು